ಬಿ.ಎಸ್. ಸುಭದ್ರಾ

# ಕವಲೇದುರ್ಗ : ಒಂದು ಪರಿಚಯ

ವಿಜಯನಗರ ಸಾಮ್ರಾಜ್ಯದಲ್ಲಿ ಸಣ್ಣ ಪಾಳೆಯಗಾರರಾಗಿ ತಮ್ಮ ಆಳ್ವಿಕೆ ಆರಂಭಿಸಿದ ಕೆಳದಿ ಅರಸರು ಕೆಳದಿ ಮತ್ತು ಸುತ್ತ ಮುತ್ತಲಿನ ಪ್ರದೇಶಗಳನ್ನು (ಇಂದಿನ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಲ್ಲಿ) ಆಳುತ್ತಿದ್ದು, ಕ್ರಿ.ಶ. ೧೫೬೫ರ ಯುದ್ಧದಲ್ಲಿ ವಿಜಯನಗರದ ಪತನವಾದ ಮೇಲೆ, ಸ್ವತಂತ್ರರಾಗಿ ರಾಜ್ಯವನ್ನು ವಿಸ್ತರಿಸಿದರು. ಕ್ರಿ.ಶ. ೧೫೦೦ರಿಂದ ೧೭೬೩ರ ವರೆಗೆ ರಾಜ್ಯವಾಳಿದ ಈ ಅರಸರ ರಾಜ್ಯ ಅದರ ಉಚ್ಛ್ರಾಯ ಸ್ಥಿತಿಯಲ್ಲಿ ಈಗಿನ ಶಿವಮೊಗ್ಗ ಜಿಲ್ಲೆ ದಕ್ಷಿಣಕನ್ನಡ ಉತ್ತರಕನ್ನಡ, ಚಿಕ್ಕಮಂಗಳೂರು, ಹಾಸನ, ಧಾರವಾಡ ಜಿಲ್ಲೆಗಳ ಕೆಲಭಾಗ ಮತ್ತು ಕೇರಳದ ಉತ್ತರ ಭಾಗಗಳನ್ನು ಒಳಗೊಂಡಿತ್ತು. ಇವರ ಮೊದಲ ರಾಜಧಾನಿ ಕೆಳದಿ. ನಂತರ ಇಕ್ಕೇರಿ ಹಾಗೂ ಕೊನೆಯಲ್ಲಿ ಬಿದನೂರು (ಇಂದಿನ ಹೊಸನಗರ ತಾಲೂಕಿನ 'ನಗರ'). ನಗರದ ಹತ್ತಿರವೇ ಇರುವ 'ಕವಲೇದುರ್ಗ' (ಅಂದಿನ ಭುವನಗಿರಿದುರ್ಗ) ಕೆಳದಿ ಅರಸರ ಆಪತ್ಕಾಲದ ಆಶ್ರಯ ತಾಣವಾಗಿಯೂ, ಕೆಲಕಾಲ ರಾಜಧಾನಿಯಾಗಿಯೂ ಇದ್ದಿತು. ಕೆಳದಿಅರಸರು ಕವಲೇದುರ್ಗವನ್ನು ತಮ್ಮ ಶಾಸನಗಳಲ್ಲಿ 'ಭುವನಗಿರಿದುರ್ಗ'ವೆಂದು ಉಲ್ಲೇಖಿಸಿದ್ದಾರೆ.

ಕೆಳದಿ ಅರಸರ ಚರಿತ್ರೆಯ ಪ್ರಮುಖ ಆಕರಗಳಲ್ಲಿ ಒಂದಾದ ಸಾಹಿತ್ಯಿಕ ಕೃತಿ ಲಿಂಗಣ್ಣಕವಿಯ 'ಕೆಳದಿನೃಪ ವಿಜಯ.' ಲಿಂಗಣ್ಣ ಕವಿಯ ಹೇಳಿಕೆಯಂತೆ ಕೆಳದಿ ಅರಸರಲ್ಲಿ ಪರಾಕ್ರಮಿಯೂ, ಬಲಾಢ್ಯನೂ ಆದ ಹಿರಿಯ ವೆಂಕಟಪ್ಪನಾಯಕನು ಕವಲೇದುರ್ಗವನ್ನಾಳುತ್ತಿದ್ದ ತೊಲೆ ತಮ್ಮ, ಮುಂಡಿಗೆ ತಮ್ಮರೆಂಬ ಸಹೋದರರನ್ನು ಸೋಲಿಸಿ ಕೋಟೆಯನ್ನು ವಶಪಡಿಸಿಕೊಂಡನು. ಆಕೋಟೆಯನ್ನು ಬಲಪಡಿಸಿ, ಅದರಲ್ಲಿ ಕಾಶಿವಿಶ್ವೇಶ್ವರ ದೇವಾಲಯವನ್ನು ಸ್ಥಾಪಿಸಿದನೆಂದೂ, ಭಂಡಾರ, ಪಣತ, ಆನೆಯ ಮಹಲು, ಉಗ್ರಾಣ, ಜ್ಞಾನಶಾಲೆ, ಕುದುರೆಯ ಲಾಯ, ಮೊದಲಾದವನ್ನು ಕಟ್ಟಿಸಿದನೆಂದೂ 'ಕೆಳದಿನೃಪವಿಜಯ' ಹೇಳುತ್ತದೆ.

ಕೆಳದಿ ಅರಸರ ರಾಜಕೀಯ ಚರಿತ್ರೆಯನ್ನು ಅವಲೋಕಿಸುವಾಗ ಕಂಡು ಬರುವ ಮುಖ್ಯ ಅಂಶವೆಂದರೆ, ತಮ್ಮ ನೆರೆಹೊರೆಯ ರಾಜರೊಡನೆ ಅಥವಾ ಬಿಜಾಪುರದ ಸುಲ್ತಾನರೊಡನೆ ಅಥವಾ ಮರಾಠರೊಡನೆ ಯುದ್ಧ. ಆತ್ಮರಕ್ಷಣೆಗಾಗಿ ಹಾಗೂ ತಮ್ಮ ರಾಜ್ಯದ ಗಡಿಗಳನ್ನು ಕಾಯ್ದುಕೊಳ್ಳಲು ಅವರು ಅಲ್ಲಲ್ಲಿ ಬಲವಾದ ಕೋಟೆಗಳನ್ನು ಕಟ್ಟಿ, ಕಾವಲು ಸೈನ್ಯವನ್ನಿಟ್ಟಿದ್ದರು. ಕರ್ನಾಟಕದ ಕರಾವಳಿಯ ಉದ್ದಕ್ಕೂ ಅಲ್ಲಲ್ಲಿ ಕೋಟೆಗಳನ್ನು ಕಟ್ಟಿದ್ದರೆಂದು 'ಕೆಳದಿನೃಪವಿಜಯ' ತಿಳಿಸುತ್ತದೆ. ಬೆಟ್ಟದ ಮೇಲಿನ ಕೋಟೆ, ಅದರೊಳಗಿನ ಮೂರು ದೇವಾಲಯಗಳು ಹಾಗೂ ಅರಮನೆಯ ಅವಶೇಷಗಳಿಗೆ ಈ ಲೇಖನ ಸೀಮಿತವಾಗಿದೆ.

'ಕವಲೇದುರ್ಗ' — ಇದು ತೀರ್ಥಹಳ್ಳಿಯಿಂದ ಪಶ್ಚಿಮಕ್ಕೆ ಸುಮಾರು ೨೧ ಕಿ.ಮೀ. ದೂರದಲ್ಲಿರುವ ಬೆಟ್ಟಪ್ರದೇಶ. ಕೆಳದಿ ಅರಸರ ಇತಿಹಾಸದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡದುಕೊಂಡಿರುವ ಕವಲೇದುರ್ಗ ಅತ್ಯಂತ ದುರ್ಗಮವಾದುದು. ಕಾಡಿನ ಬೆಟ್ಟಗಳ ಮಧ್ಯೆ ಇರುವ ಈ ದುರ್ಗ ಕಾವಲು ಸೈನ್ಯವನ್ನಿಡುವ ಕಾವಲು ದುರ್ಗವಾಗಿಯೂ, ಕೆಳದಿ ಅರಸರಿಗೆ ಆಪತ್ಕಾಲದಲ್ಲಿ

ರಕ್ಷಣೆ ನೀಡಿದ ತಾಣವಾಗಿಯೂ ಈ ಗಿರಿದುರ್ಗ ಪ್ರಸಿದ್ಧ ವಾಗಿದೆ. ಪಶ್ಚಿಮ ಘಟ್ಟದ ಬೆಟ್ಟ ಸಾಲುಗಳ ಜೊತೆಗೇ ಪ್ರಕೃತಿದತ್ತ ದಟ್ಟವಾದ ಕಾಡಿನ ರಕ್ಷಣೆಯಿದೆ. ಗಗನ ಚುಂಬಿ ವೃಕ್ಷಗಳಿಂದ ಕೂಡಿರುವ ಈ ದುರ್ಗ ಸಮುದ್ರ ಮಟ್ಟದಿಂದ ಸುಮಾರು ೩೦೫೮ ಅಡಿಗಳಷ್ಟು ಎತ್ತರದಲ್ಲಿದೆ.

ಬೆಟ್ಟದ ಕೆಳಗಿನ ಊರನ್ನೂ ಸೇರಿಸಿದಂತೆ, ಏಳು ಸುತ್ತುಗಳಿರುವ ಈ ಕೋಟೆಯಲ್ಲಿ ಈಗ ಒಳಗಿನ ಐದು ಸುತ್ತುಗಳು ಮಾತ್ರ ಉಳಿದಿವೆ. ಗ್ರಾಮರಕ್ಷಣೆಗಾಗಿ ಇದ್ದ ಎರಡು ಸುತ್ತು ಕೋಟೆ ಗೋಡೆಗಳು ಈಗ ನಾಶ ವಾಗಿ, ಅಲ್ಲಲ್ಲಿ ಅವುಗಳ ಕುರುಹುಗಳು ಕಂಡು ಬರುತ್ತವೆ.

ಆಯತಾಕಾರದ ಈ ಕೋಟೆಯ ಗೋಡೆಗಳು ಸುಮಾರು ೩೦ ಅಡಿಗಳಷ್ಟು ಎತ್ತರವಿದ್ದು, ೨ ಅಡಿ ಗಳಷ್ಟು ಅಗಲವಿದ್ದು, ಚೌಕಾಕಾರದ ಮತ್ತು ಆಯತಾಕಾರದ ಕಣಶಿಲೆಯಿಂದ ಕಟ್ಟಲ್ಪಟ್ಟಿವೆ.

ಈ ಕೋಟೆಯ ಐದು ಸುತ್ತು ಗೋಡೆಗಳಿಗೂ ಪ್ರತ್ಯೇಕವಾಗಿ ಕಲ್ಲು ಚೌಕಟ್ಟಿನ ಪ್ರವೇಶದ್ವಾರಗಳಿವೆ. ಗೋಡೆಗಳ ನಡುವೆ ಅಲ್ಲಲ್ಲಿ ಬುರುಜುಗಳನ್ನು ಕಟ್ಟಿ, ಫಿರಂಗಿಗಳನ್ನು ಇಡಲು ಅವಕಾಶ ಮಾಡಿದ್ದಾರೆ.

ಈ ಕೋಟೆಗೆ ಹಲವು ಬಾಗಿಲುಗಳಿದ್ದು: 'ಭದ್ರಾಪುರ'ದ ಬಾಗಿಲಿನ ಬಳಿ ಸಣ್ಣ ಅಡ್ಡಗೋಡೆ, ಉಂಡೆಕಲ್ಲಿನ ಗೋಡೆಗಳು, ಚಾವಡಿಯ ಅವಶೇಷಗಳಿವೆ; ಅಶ್ವಗಳು ನಡೆಯುವ ಮಾರ್ಗವಿದೆ. ಗುಂಡ್ಡದಲ್ಲೇ ಉಂಡೆಕಲ್ಲುಗಳಿಂದ ಸಮತಟ್ಟಾದ ಮಾರ್ಗವನ್ನು ಮಾಡಲಾಗಿದೆ. ಇಲ್ಲಿಂದ ಬೆಟ್ಟವನ್ನೇರುತ್ತಾ ಹೋದರೆ, ಕೋಟೆಯ ಮೊದಲನೆಯ ಮಹಾದ್ವಾರ ಸಿಗುತ್ತದೆ. ಆಚೀಚೆ ಬುರುಜುಗಳು. ಈ ಬುರುಜುಗಳು ಬಿದನೂರಿನ, (ಇಂದಿನ 'ನಗರ'ದ) ಕೋಟೆಯ ಬುರುಜುಗಳನ್ನು ಹೋಲುತ್ತವೆ. ಪ್ರವೇಶದ್ವಾರದ ಪಕ್ಕದಲ್ಲೇ ಕಮಾನಿನಾಕಾರದ 'ಕಾವಲುಗಾರರ ಕೊಠಡಿ' ಇದೆ.

ಉಂಡೆಕಲ್ಲುಗಳ ಮಾರ್ಗದಲ್ಲೇ ಮುಂದೆ ಹೋದರೆ ಎರಡನೆಯ ಮಹಾದ್ವಾರ ಸಿಗುತ್ತದೆ. ಒಳಭಾಗದಲ್ಲಿ ಮುಖಮಂಟಪವಿದ್ದ ಕುರುಹುಗಳಿವೆ. ಮುಖಮಂಟಪದ ಕಂಬಗಳು ಅಲ್ಲಲ್ಲಿ ಬಿದ್ದಿವೆ. ದ್ವಾರದ ಗೋಡೆಗಳಲ್ಲಿ ಅನೇಕ ಉಬ್ಬುಶಿಲ್ಪಗಳಿವೆ—ಆನೆಯ ಮೇಲೆ ವ್ಯಕ್ತಿ ಯೊಬ್ಬನ ಸವಾರಿ, ಮಿಥುನಶಿಲ್ಪ, ಇತ್ಯಾದಿ. ಎಡ ಭಾಗದಲ್ಲಿ ಕಮಾನಿನಾಕಾರದ ಕಾವಲುಗಾರರ ಕೊಠಡಿ. ಇಲ್ಲಿಯೇ ಹತ್ತಿರದಲ್ಲಿ 'ನಾಗತೀರ್ಥ'ವೆಂಬ ಕೊಳ ಹಾಗೂ ಏಳು ಹೆಡೆಯ ನಾಗನ ಶಿಲ್ಪವಿರುವ ಕಲ್ಲಿದೆ. ಈ ಕಣಶಿಲೆ ಒಂದೂವರೆ ಅಡಿ ಅಗಲವೂ ೬ ಅಡಿ ಎತ್ತರವೂ ಇದ್ದು, ಮಣ್ಣಿನಲ್ಲಿ ಮುಚ್ಚಿಹೋಗಿರುವುದರಿಂದ ಕೇವಲ ೪ ಅಡಿ ಎತ್ತರ ಮಾತ್ರ ಕಾಣುತ್ತದೆ. ಬಳಿಯಲ್ಲೇ ಹಲವಾರು ನಾಗರ ಕಲ್ಲುಗಳಿವೆ. ಅವುಗಳಲ್ಲಿ ಒಂದು ಸುಮಾರು ೬ ಅಡಿ ಎತ್ತರ, ೧ ಅಡಿ ಅಗಲವಿದ್ದು, ಕಣಶಿಲೆ (granite) ಯಿಂದ ಕೆತ್ತಲಾಗಿದೆ.

ಮೂರನೆಯ ಮಹಾದ್ವಾರದಲ್ಲೂ ಕಲ್ಲು ಚೌಕಟ್ಟಿನ ಪ್ರವೇಶದ್ವಾರ, ಒಳಭಾಗದಲ್ಲಿ ಚಚ್ಚೌಕದ ಕಂಬಗಳು ಹಾಗೂ ಕಮಾನಿನಾಕೃತಿಯ ಕಾವಲುಗಾರರ ಕೊಠಡಿ. ಬಳಿಯಲ್ಲೇ ಎತ್ತರದ ಗೋಡೆಯ ಮೇಲೆ 'ನಗಾರಿಕಟ್ಟೆ' ಎಂಬ ಸ್ಥಳವಿದೆ. ಶತ್ರುಗಳು ಕೋಟೆಯನ್ನು ಮುತ್ತಿದಾಗ ಎಚ್ಚರಿಕೆ ನೀಡಲು ಇಲ್ಲಿ ನಗಾರಿ ಬಾರಿಸು ತ್ತಿದ್ದರಂತೆ. ಹತ್ತಿರವೇ ಹದಿನಾಲ್ಕು ಕಿಂಡಿಗಳ ದೊಡ್ಡ ಬುರುಜು. ಬಳಿಯಲ್ಲೇ ಫಿರಂಗಿಯೊಂದು ತುಂಡಾಗಿ ಬಿದ್ದಿದೆ.

ನಾಲ್ಕನೆಯ ಮಹಾದ್ವಾರಕ್ಕೆ ಸ್ವಲ್ಪ ದೂರ ಮೆಟ್ಟಿಲುಗಳೂ ಇವೆ. ಆಚೀಚೆ ಬುರುಜುಗಳು, ಬಲಗಡೆ ಕಾವಲುಗಾರರ ಕೊಠಡಿ. ಇಲ್ಲಿಂದ ಮುಂದೆ ಹೋದರೆ, ಕಾಶಿವಿಶ್ವೇಶ್ವರ ದೇವಾಲಯವಿದೆ. ಸಾಮಾನ್ಯವಾಗಿ ದೇವಾಲಯಗಳ ಮುಂಭಾಗದಲ್ಲಿ ಒಂದು ದೀಪಸ್ತಂಭವಿದ್ದರೆ, ಈ ದೇವಾಲಯದ ಮುಂದೆ ಆಚೀಚೆ ಎರಡು ದೀಪಸ್ತಂಭಗಳಿವೆ. ಮೂರು ಅಂತಸ್ತು ಗಳನ್ನು ಹೊಂದಿರುವ ಈ ಶಿಲಾ ದೀಪಸ್ತಂಭಗಳ ತಳ ಭಾಗದಲ್ಲಿ ೭ ಅಡಿ ಉದ್ದ, ೭ ಅಡಿ ಅಗಲದ ಚೌಕಾ ಕಾರದ ಶಿಲಾಪೀಠಗಳಿವೆ. ಸುಮಾರು ೧೩ ಅಡಿಗಳಷ್ಟು ಎತ್ತರದ ಕಂಬಗಳು ಒಂದೂವರೆ ಅಡಿದಪ್ಪ (thickness) ವಿದೆ. ಪೀಠದ ಸುತ್ತಲೂ ಕೆತ್ತನೆಯಿದ್ದು. ದೇವಾಲಯಕ್ಕೆ ಅಭಿಮುಖವಾಗಿ ಗಣಪತಿಯ

ಶಿಲ್ಪವಿದ್ದು, ಉಳಿದ ಕಡೆ ಸಿಂಹದ ಕೆತ್ತನೆ ಇದೆ. ನಾಲ್ಕು ಸಿಂಹಗಳು ಇಡಿಯ ದೀಪಸ್ತಂಭಗಳನ್ನು ನಾಲ್ಕು ದಿಕ್ಕಿನಲ್ಲಿ ಹೊತ್ತಿವೆ. ಪಾನಸ್ತಂಭವನ್ನು ಹೋಲುವ ದೀಪಸ್ತಂಭದ ಮೇಲ್ತುದಿ ಆಕರ್ಷಕವಾಗಿದೆ.

ದೇವಾಲಯದ ಮಹಾದ್ವಾರದ ಕಟ್ಟಡ ಹದಿಮೂರೂವರೆ ಅಡಿ ಉದ್ದವೂ ಹದಿಮೂರೂವರೆ ಅಡಿ ಎತ್ತರವೂ ಇದ್ದು, ೩೫ ಅಡಿ ಅಗಲವಿದೆ. ಗೋಪುರರಹಿತ ಮೇಲ್ಛಾವಣಿ ಆಯತಾಕಾರದಲ್ಲಿದೆ. ಇದರ ತುದಿಗಳಲ್ಲಿ ಮುಸ್ಲಿಂ ವಾಸ್ತುಶಿಲ್ಪ ಶೈಲಿಯ ಮಿನಾರ್‌ಗಳೂ ತೆನೆಗಳ ಪಟ್ಟಿಕೆಗಳೂ ಇದ್ದು, ಕೆಳದಿ ಅರಸರ ವಾಸ್ತುಶಿಲ್ಪದಲ್ಲಿ ಮುಸ್ಲಿಂ ಶೈಲಿಯ ಪ್ರಭಾವಕ್ಕೆ ಉತ್ತಮ ಉದಾಹರಣೆಯಾಗಿದೆ. ಒಟ್ಟು ೮ ಮಿನಾರ್‌ಗಳಿದ್ದು, ಈ ಮೇಲ್ಛಾವಣಿ ಶಿಲಾಕಂಬಗಳ ಆಧಾರದಿಂದ ನಿಂತಿದೆ. ಇದರ ಮೇಲ್ಛಾವಣಿ ಲಾಡ್‌ಖಾನ್ ದೇವಾಲಯದ ಮೇಲ್ಛಾವಣಿಯನ್ನು ಹೋಲುತ್ತಿದ್ದು, ಮಲೆನಾಡಿನ ಅಧಿಕ ಮಳೆ ಬೀಳುವ ಪ್ರದೇಶಕ್ಕೆ ಅನುಗುಣವಾಗಿ, ನೀರು ಹರಿದು ಹೋಗಲು ಕಲ್ಲಿನ ಲೋವೆ ಇದೆ. ಗೋಡೆಗಳನ್ನು ಮಣ್ಣುಗಾರೆ ಹಾಗೂ ಜಂಬಿಟ್ಟಿಗೆ (laterite) ಕಲ್ಲುಗಳಿಂದ ಕಟ್ಟಿದ್ದಾರೆ. ಈ ರೀತಿಯ ಮೇಲ್ಛಾವಣಿಯನ್ನು ಇಕ್ಕೇರಿಯ ಪಾರ್ವತಿ ದೇವಾಲಯದಲ್ಲೂ, ಕವಲೇದುರ್ಗದ ಸಂಜೀವಾಂಜನೇಯ ದೇವಾಲಯದಲ್ಲೂ ಕಾಣಬಹುದು.

ಅಂಗಳದ ನಂತರ ದೇವಾಲಯದ ಮುಖ್ಯ ಕಟ್ಟಡದಲ್ಲಿ ಗರ್ಭಗುಡಿ, ಸುಕನಾಸಿ, ಮುಖಮಂಟಪವಿದೆ. ಇದರ ಉದ್ದ ೩೭ ಅಡಿ, ಅಗಲ ೧೪ ಅಡಿ, ಎತ್ತರ ಹದಿನಾರೂವರೆ ಅಡಿ ಇದೆ. ಹಿರಿಯ ವೆಂಕಟಪ್ಪನಾಯಕನಿಂದ ಸ್ಥಾಪಿತವಾದ ಅಮೃತಶಿಲೆಯ ಕಾಶಿವಿಶ್ವೇಶ್ವರ ಲಿಂಗವಿದೆ. ಈ ಲಿಂಗವನ್ನು ದೊಡ್ಡ ಸಂಕಣ್ಣನಾಯಕನು ಕಾಶಿಯಿಂದ ತೀರ್ಥಯಾತ್ರೆಯ ಸಮಯದಲ್ಲಿ ತಂದನೆಂದು ಕೆಳದಿನೃಪವಿಜಯ ತಿಳಿಸುತ್ತದೆ.

ಶಿಲಾದೇಗುಲವಾದ ಈ ಗರ್ಭಗುಡಿಯ ಮೇಲೆ ಅಂತಸ್ತುಗಳುಳ್ಳ ಶಿಖರವಿದೆ. ಮುಂಭಾಗದ ದ್ವಾರಬಂಧ ಕಮಾನಿನಾಕೃತಿಯಲ್ಲಿದ್ದು, ಆಚೀಚೆ ಎರಡು ಗಿಳಿಗಳ ಶಿಲ್ಪವಿದೆ. ಅಕ್ಕ ಪಕ್ಕದ ದೇವಗೋಪುರದಲ್ಲಿ ಚಾಮರಧಾರಿಣಿಯರು. ಈ ಕೆತ್ತನೆ ಇಕ್ಕೇರಿಯ ಪಾರ್ವತಿ ದೇವಾಲಯದ ಕೆತ್ತನೆಯನ್ನು ಹೋಲುತ್ತದೆ. ಮೆಟ್ಟಿಲುಗಳ ಯಾಳಿಯಲ್ಲಿ ಶಾರ್ದೂಲವಿದೆ. ಮುಖಮಂಟಪದ ಆಚೀಚೆ ಇರುವ ೨ ಕಂಬಗಳಲ್ಲಿ ಆನೆಯ ಸೊಂಡಿಲ ಮೇಲೆ ಸಿಂಹ ತನ್ನ ಮುಂಗಾಲನ್ನೆತ್ತಿ ನಿಂತಿದೆ–ವಿಜಯನಗರದ ಹಂಪಿಯ ಶಿಲ್ಪದ ಪ್ರಭಾವ ಎದ್ದು ಕಾಣುತ್ತದೆ. ಕವಲೇದುರ್ಗದ 'ಕಲ್ಯಾಣ ಮಹಲ್'ನ ಅವಶೇಷಗಳಲ್ಲೂ, ಕೊಲ್ಲೂರಿನ ಮೂಕಾಂಬಿಕಾ ದೇವಾಲಯದ ಕಂಬಗಳಲ್ಲೂ, ನಗರ(ಬಿದನೂರು)ದ ಕಲ್ಮಠದಲ್ಲೂ ಈ ರೀತಿಯ ಕಂಬಗಳ ರಚನೆಯಿದ್ದು, ವಿಜಯನಗರದ ವಾಸ್ತುಶಿಲ್ಪ ಶೈಲಿ ಕೆಳದಿ ಅರಸರ ಕಾಲದಲ್ಲೂ ಮುಂದುವರಿದುದನ್ನು ಕಾಣಬಹುದು.

ಸುಕನಾಸಿಯ ದ್ವಾರಬಂಧದ ಆಚೀಚೆ ಶೈವ ದ್ವಾರಪಾಲಕ ಶಿಲ್ಪಗಳಿವೆ. ದುರ್ಗಿಯ ವಿಗ್ರಹ, ನಂದಿ ವಿಗ್ರಹಗಳೂ ಅಲ್ಲಿವೆ. ಸುಕನಾಸಿ ಮತ್ತು ಗರ್ಭಗುಡಿಯ ದ್ವಾರಬಂಧ ಆಯತಾಕಾರವಿದೆ,

ದೇವಾಲಯದ ಪ್ರಾಕಾರದಲ್ಲಿ ಶಿಲಾಮಂಟಪವೊಂದಿದ್ದು, ಇದನ್ನು ಕಲ್ಯಾಣ ಮಂಟಪ/ಉತ್ಸವ ಮಂಟಪ ಎಂದೂ ಕರೆಯುತ್ತಾರೆ. ಇದು ೧೦ ಅಡಿ ಉದ್ದವಿದ್ದು, ಹನ್ನೊಂದೂವರೆ ಅಡಿ ಅಗಲ ಹಾಗೂ ಅದಿನಾಲ್ಕು ಅಡಿ ಎತ್ತರವಿದೆ.

ದೇವಾಲಯದ ಹೊರಗೋಡೆಯಲ್ಲಿ ಉಬ್ಬುಶಿಲ್ಪಗಳಿವೆ–ವೀರರಿಬ್ಬರ ಹೋರಾಟ, ಯೋಧನೊಬ್ಬ ಅಶ್ವದ ಮೇಲೆ ಕುಳಿತು ಭಲ್ಲೆ ಎಸೆಯುತ್ತಿರುವುದು, ಆನೆಗಳೆರಡು ಎದುರು–ಬದುರಾಗಿ ನಡೆಯುತ್ತಿರುವುದು-ಕಾಲ್ಪನಿಕ ಶಿಲ್ಪಗಳು, ಇತ್ಯಾದಿ.

ಮಹಾದ್ವಾರದ ಮೇಲ್ಛಾವಣಿಯಲ್ಲಿ ನವಗ್ರಹಗಳು ಹಾಗೂ ಅರಳಿದ ಕಮಲದ ಕೆತ್ತನೆ ಇದೆ.

ಈ ದೇವಾಲಯದ ಸಮೀಪವೇ 'ಎಣ್ಣೆಬಾವಿ' 'ತುಪ್ಪದಬಾವಿ' ಎಂಬ ಹೆಸರುಳ್ಳ ಎರಡು ಬಾವಿಗಳಿವೆ. ಚಚ್ಚೌಕ ಸ್ಥಳ (ಸುಮಾರು ೨ ಅಡಿಗಳಷ್ಟು) ಬಿಟ್ಟು, ಕಲ್ಲು ಚಪ್ಪಡಿಗಳಿಂದ ಮುಚ್ಚಿದ್ದಾರೆ.

ಹತ್ತಿರದ ಬಂಡೆಗಲ್ಲಿನಲ್ಲಿ ಕೊರೆದ ಶಿಲಾಶಾಸನವೊಂದಿದೆ. ಬುಕ್ಕಣ್ಣವೊಡೆಯರ ಕುಮಾರ ಮಂದಗಿರಿಯ

ವಿರುಪಣಣವೊಡೆಯರು....ನಗರಿಯ ಕೋಟೆಯ ಮಯಿಲಾರ ದೇವರಿಗೆ ಅಮೃತ ಪಡಿಭೋಗಕ್ಕೆ ಬಿಟ್ಟ (ದೇ)ವದಾನ ಭೂಮಿಯ ವಿವರವಿದೆ. ಆದರೆ ಮೈಲಾರೇಶ್ವರ ದೇವಾಲಯದ ಕುರುಹುಗಳು ಎಲ್ಲೂ ಕಂಡುಬರುವುದಿಲ್ಲ.

ಹತ್ತಿರದ ಕೋಡುಬಂಡೆಯ ಮೇಲೆ ಲಕ್ಷ್ಮೀನಾರಾಯಣ ಗುಡಿ ಇದೆ. ಈ ಗುಡಿಯ ಉದ್ದ ೧೦ ಅಡಿ, ಅಗಲ ೧೦ ಅಡಿ, ಎತ್ತರ ಹದಿನೈದೂವರೆ ಅಡಿ ಇದೆ. ಬಂಡೆಯನ್ನು ಎಚ್ಚರಿಕೆಯಿಂದ ಹತ್ತಿಹೋಗ ಬೇಕು. ನಾರಾಯಣನ ಎಡ ತೊಡೆಯ ಮೇಲೆ ಲಕ್ಷ್ಮಿ ಕುಳಿತಿದ್ದು, ವಿಗ್ರಹ ಸುಮಾರು ಎರಡೂವರೆ ಅಡಿ ಎತ್ತರವಿದೆ. ಪೀಠ ಒಂದೂವರೆ ಅಡಿ ಎತ್ತರವಿದೆ. ಪ್ರಭಾವಳಿಯಲ್ಲಿ ಸುಂದರವಾದ ಕೆತ್ತನೆ ಇದೆ. ಕಟ್ಟಡದ ಮೇಲಿನ ಶಿಖರದ ಒಂದು ಭಾಗ ನಾಶವಾಗುತ್ತಿದೆ. ಯಾಳಿ ಹಾಳಾಗಿದೆ.

ಕೋಡುಬಂಡೆಯಿಂದ ಇಳಿದು, ಮುಂದೆ ನಡೆದಾಗ, ಕಲ್ಲಿನಲ್ಲಿ ಕಟ್ಟಿದ ಕೊಳ(ಚೌಕಾಕಾರ)ವಿದ್ದು, ಈಗ ಅಲ್ಲಿ ನೀರಿಲ್ಲ. 'ಪಣತ' ಇದ್ದ ಸ್ಥಳವನ್ನು ಮಾತ್ರ ಗುರುತಿಸಬಹುದು. ಮುಂದೆ ನಡೆದರೆ, ಕೊನೆಯ ಮಹಾದ್ವಾರ ಸಿಗುತ್ತದೆ. ಹತ್ತಿರವೇ ಕಲ್ಲಿನ ತೊಟ್ಟಿ ಯೊಂದಿದೆ.

ಇದನ್ನು ದಾಟಿ ಒಳಗೆ ಬಂದರೆ, ಅರಮನೆಯ ಹೊರ ಅಂಗಳ ಸಿಗುತ್ತದೆ. ಈ ಅಂಗಳ ಸುಮಾರು ೫೦ ಅಡಿ ವ್ಯಾಸವಿದ್ದು, ಎಡಕ್ಕೆ ಸುಮಾರು ೧೦ ಅಡಿ ಎತ್ತರ, ೪ ಅಡಿ ಅಗಲದ ಕಲ್ಲಿನ ದ್ವಾರಬಂಧ ಕಾಣುತ್ತದೆ. ಕಲ್ಲು ಕಂಬಗಳೂ, ತೊಲೆಗಳೂ ಅಸ್ತವ್ಯಸ್ತವಾಗಿ ಬಿದ್ದಿದ್ದು, ವೃಕ್ಷಗಳ ಸಮೂಹ ಬೆಳೆದಿದೆ. ಅರಮನೆಯ ಹಿಂಭಾಗದಲ್ಲಿ 'ಶಾಂತಗಂಗೆ' ಎಂಬ ಕೊಳವಿದ್ದು, ಇದರಿಂದ ಅರಮನೆಗೆ ನೀರು ಬರಲು ಕಾಲುವೆ ಇದ್ದಿತು. ಸುಮಾರು ೧೦ ಅಡಿ ಉದ್ದ, ೫ ಅಡಿ ಅಗಲದ ತೊಟ್ಟಿಗೆ ಈ ನೀರು ಸರಬರಾಜಾಗು ತ್ತಿತ್ತು. ಹತ್ತಿರದಲ್ಲಿಯೇ ಕಲ್ಲು ಚಪ್ಪಡಿಯಲ್ಲಿ ಅಷ್ಟ ಕೋನಾಕೃತಿಯ ಬಾಯಿ ಇರುವ ಒಂದು ನೆಲಬಾವಿ ಇದೆ. ಆದರಲ್ಲಿ ನೀರಿಲ್ಲ.

ಇಲ್ಲಿಂದ ಮುಂದೆ ಹೋದರೆ, ಸ್ವಾಭಾವಿಕವಾದ ಗುಡ್ಡದ ಬದಿಗೆ ಕಲ್ಲುಗಳಿಂದ ಕಟ್ಟಿ, ಗೋಡೆ ನಿರ್ಮಿಸಿದ್ದಾರೆ. ಮೇಲೆ ಹೋಗಲು ಸುಮಾರು ಇಪ್ಪತ್ತು ಮೆಟ್ಟಿಲುಗಳಿವೆ. ಮೇಲೆ ಮತ್ತೊಂದು ಅಷ್ಟಕೋನಾಕೃತಿಯ ಬಾಯಿ ಇರುವ ಬಾವಿ ಇದ್ದು, ಅದರಲ್ಲಿ ನೀರಿಲ್ಲ.

ಅರಮನೆಗೆ ಹೊಂದಿಕೊಂಡಂತೆ, ಎಡಕ್ಕೆ, ಎತ್ತರವಾದ ಸುಮಾರು ೧೦೦ ಅಡಿ ಉದ್ದ, ೨೫ ಅಡ್ಡಿ ಅಗಲದ ಸಮತಟ್ಟಾದ ಪ್ರದೇಶವಿದೆ. ಇಲ್ಲಿ 'ಜೋಕಾಲಿ ಕಂಬ' ಎಂದು ಕರೆಯಲಾಗುವ ಕಲ್ಲಿನ ಚೌಕಟ್ಟು ಇದೆ. ಕಂಬದ ಎತ್ತರ ೮ ಅಡಿಗಳು. ಸುಮಾರು ೪ ಅಡಿಗಳಷ್ಟು ಮಣ್ಣಿನಲ್ಲಿ ಮುಚ್ಚಿಹೋಗಿದ್ದು, ಇಡಿಯ ಪ್ರದೇಶ ಉದ್ಯಾನವಾಗಿದ್ದಿರಬೇಕು.

ಕಾಲು ಹಾದಿಯಲ್ಲಿ ಮೇಲೆ ಹೋದರೆ 'ತೋಪು ಖಾನೆ' ಸಿಗುತ್ತದೆ ಕಲ್ಲಿನಿಂದಲೇ ನಿರ್ಮಿತವಾದ ಕಟ್ಟಡ. ಛಾವಣಿ ಉಳಿದಿಲ್ಲ. ಇಲ್ಲಿಂದ ಬಲಭಾಗಕ್ಕೆ ಸ್ವಲ್ಪ ದೂರ ಹೋದರೆ 'ಶಿಖರೇಶ್ವರ' ಎಂದು ಕರೆಯಲಾಗುತ್ತಿರುವ ಗುಡಿ ಸಿಗುತ್ತದೆ.

ದುರ್ಗದಲ್ಲಿ ಅತ್ಯಂತ ಎತ್ತರದ ಪ್ರದೇಶದಲ್ಲಿ 'ಶಿಖರೇಶ್ವರಗುಡಿ' ಇದ್ದು. ಇದರ ಉದ್ದ ೧೦ ಅಡಿ, ಅಗಲ ೧೦ ಅಡಿ ಎತ್ತರ, ಹದಿನಾರೂವರೆ ಅಡಿಗಳು. ಒಳಗೆ ಪೀಠ ೧ ಅಡಿ ಎತ್ತರ, ಆ ಈಶ್ವಲಿಂಗ ಅರ್ಧ ಅಡಿ ಎತ್ತರವಿದೆ. ಗುಡಿಯಲ್ಲಿ ಕೆತ್ತನೆ ಇಲ್ಲ. ಮೆಟ್ಟಿಲುಗಳು ಮಾಯವಾಗಿವೆ. ಗುಡಿಯ ಬಾಗಿಲು ಪಶ್ಚಿಮಕ್ಕಿದೆ. ಇಲ್ಲಿಂದ ಸಂಜೆಯ ಆಗಸದ ಸೊಬಗು ಹಾಗೂ ಪಶ್ಚಿಮ ಸಮುದ್ರದ ದೃಶ್ಯ ಅತ್ಯಂತ ಮನೋಹರವಾಗಿ ಕಾಣುತ್ತದೆ.

'ಕವಲೇದುರ್ಗ' ಊರಿನಲ್ಲೂ ಕೆಳದಿ ಅರಸರು ಕಟ್ಟಿಸಿದ ಅನೇಕ ದೇವಾಲಯಗಳು ಇಂದಿಗೂ ಉಳಿದಿದ್ದು, ಕೆಳದಿ ಅರಸರ ಕಾಲದ ವಾಸ್ತುಶಿಲ್ಪದ ಪ್ರತಿನಿಧಿಗಳಾಗಿವೆ ಕೆರೆಕಟ್ಟೆ ಗಣಪತಿ ಎಂದು ಕರೆಯಲ್ಪಡುವ ಗಣಪತಿ ದೇವಾಲಯ (ಮೂಲ ವಿಗ್ರಹ ಮಾತ್ರ ಕೆಳದಿ ಅರಸರ ಕಾಲದ್ದು), ವಿರೂಪಾಕ್ಷ ದೇವಾಲಯ, ವಿಜಯವಿಠ್ಠಲ ದೇವಾಲಯ, ವೀರಭದ್ರ ದೇವಾಲಯ (ಸುಂದರ ಶಿಲ್ಪ ವೀರಭದ್ರನನ್ನುಳಿದು ದೇವಾಲಯ ಜೀರ್ಣಗೊಂಡಿದೆ), ನರಸಿಂಹ,

ಸಂಜೀವಾಂಜನೇಯ, ಕೋಟೆ ಆಂಜನೇಯ, ಮೊದಲಾದ ದೇವಾಲಯಗಳೂ, ಕಲ್ಯಾಣ ಮಂಟಪದ ಅವಶೇಷಗಳೂ, ತಿಮ್ಮಣ್ಣ ನಾಯಕನ ಕೆರೆಯ ದಂಡೆಯ ಮೇಲಿನ ಮಹಾನವಮಿ ಬಯಲಿನಲ್ಲಿ ಹಲವಾರು ಮಹಾಸತಿ ಕಲ್ಲುಗಳು. ಹಿರಿಯ ವೆಂಕಟಪ್ಪನಾಯಕ ಕಟ್ಟಿಸಿದ ಮಸೀದಿ (ಜೀರ್ಣಗೊಂಡಿದೆ). ಮಹಾ ಮಹತ್ತಿನ ಮಠ, ಎಲ್ಲವೂ ಕೆಳದಿ ಅರಸರ ಕಾಲದ ಶಿಲ್ಪಕಲಾ ವೈಭವದ ಮೂಕ ಸಾಕ್ಷಗಳಾಗಿವೆ.*

## ಗ್ರಂಥಋಣ :


1. K.N. Chitnis : *Keladi Polity*
2. *Epigraphia Carnatic*, Vol, vii
3. ಕೆಳದಿನೃಪವಿಜಯಂ
4. ಬಿ.ಎಸ್. ಶಾಸ್ತ್ರಿ : ಕೆಳದಿ ಅರಸರು ಹಾಗೂ ಪೋರ್ಚುಗೀಜರು
5. ಕೆ. ಜಗನ್ನಾಥ ಶಾಸ್ತ್ರಿ : ಕೌಲೇದುರ್ಗ



* ಈ ಪ್ರವಾಸದಲ್ಲಿ ಸಹಕರಿಸಿದ ತಿರ್ಥಹಳ್ಳಿಯ ಶ್ರೀ ಗೋಪಾಲಕೃಷ್ಣ ಉಡುಪರಿಗೂ ನಿಲುವಾಸೆಯ ಶ್ರೀ ಎನ್.ಎಸ್. ವೆಂಕಟರಮಣ ಮತ್ತು ಸಹೋದರರಿಗೂ, ಕೌಲೇದುರ್ಗದ ಶ್ರೀ ಸುಬ್ರಹ್ಮಣ್ಯ ಜೋಯಿಸರಿಗೂ ಕೃತಜ್ಞನೆಗಳು